# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಅಕ್ಟೋಬರ್ ೨೦, ೨೦೧೬ (ಆಶ್ವಯುಜ ೨೮, ಶಕ ವರ್ಷ ೧೯೩೮)<br>Bengaluru, Thursday, October 20, 2016 (Aashwayuja 28, Shaka Varsha 1938) | ಸಂಚಿಕೆ ೪೧<br>Issue 41 |
|---|---|---|


## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಅಧ್ಯಕ್ಷರು, ಗ್ರಾಮಲೆಕ್ಕಿಗರ ನೇಮಕಾತಿ ಮತ್ತು ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು ಕೋಲಾರ ಜಿಲ್ಲೆ, ಕೋಲಾರ

**ಅಧಿಸೂಚನೆ**

**ಅಧಿಸೂಚನೆ ಸಂಖ್ಯೆ: ಸಿಬ್ಬಂದಿ(2) ಸಿಆರ್: 72/2016–17, ದಿನಾಂಕ 21/09/2016.**

**ವಿಷಯ:** ಕೋಲಾರ ಜಿಲ್ಲಾ ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ ನಂ. ಆರ್‌ಡಿ 299 ಬಿಎಸ್‌ಸಿ 2006 ದಿನಾಂಕ 3/2/2009
2. ಸರ್ಕಾರದ ಆದೇಶಸಂಖ್ಯೆ ಸಿಆಸುಇ. 08. ಸೆಹಿಮ.95 ದಿ: 20/6/95
3. ಸರ್ಕಾರದ ಆದೇಶ ಸಂಖ್ಯೆ ಸಿಆಸು 53 ಸೇನೆನಿ 2007, ದಿನಾಂಕ 4/1/2008
4. ಸರ್ಕಾರದ ಪತ್ರ ನಂ. ಕಂಇ 4 ಬಿಎಸ್‌ಸಿ 2011 ದಿನಾಂಕ 25/2/2011
5. ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 128 ಸೇನೆನಿ 2006 ದಿನಾಂಕ 1/8/2009
6. ಸರ್ಕಾರದ ಅಧಿಸೂಚನೆ ಸಂಖ್ಯೆ ಆರ್‌ಡಿ 299 ಬಿಎಸ್ಸಿ 2006 ದಿನಾಂಕ 24/07/2009
7. ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 54 ಎಸ್‌ಆರ್‌ಆರ್ 2012 ದಿನಾಂಕ 23/6/2012

ಕೋಲಾರ ಜಿಲ್ಲಾ ಘಟಕ, ಕಂದಾಯ ಇಲಾಖೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರನೇಮಕಾತಿ ಮೂಲಕ ಭರ್ತಿ ಮಾಡಲು ಉಲ್ಲೇಖ (4) ರಂತೆ ಸರ್ಕಾರ ಅನುಮತಿ ನೀಡಿರುತ್ತದೆ. ಜಿಲ್ಲೆಯ ಕಂದಾಯ ಘಟಕದಲ್ಲಿ ವಿವಿಧ ಕಾರಣಗಳಿಂದ ಖಾಲಿ ಇರುವ ಹಾಗೂ ತೆರವಾಗಲಿರುವ ನಾಡಕಛೇರಿ ಮತ್ತು ಭೂಮಿ ಕೇಂದ್ರದ ಗ್ರಾಮಲೆಕ್ಕಿಗರ **07** ಹುದ್ದೆಗಳು, ಹಾಗೂ ಕಂದಾಯ ವೃತ್ತಗಳಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ **49** ಹುದ್ದೆಗಳು ಒಟ್ಟು **56 ಹುದ್ದೆಗಳನ್ನು** ನೇರನೇಮಕಾತಿ ಮೂಲಕ ತುಂಬಲು ಉದ್ದೇಶಿಸಿ, ಸದರಿ ಗ್ರಾಮಲೆಕ್ಕಿಗರ ಹುದ್ದೆಗಳನ್ನು ಉಲ್ಲೇಖ (2) ಹಾಗೂ (3) ರಲ್ಲಿನ ಸರ್ಕಾರದ ಆದೇಶಗಳನ್ವಯ ನೇರಮೀಸಲಾತಿ ಹಾಗೂ ಸಮತಲ ಮೀಸಲಾತಿಗಳನ್ನು ಆಧರಿಸಿ, ಕರ್ನಾಟಕ ನಾಗರಿಕ ಸೇವೆಗಳು (ರೆವಿನ್ಯೂ ಸಬಾರ್ಡಿನೇಟ್ ಬ್ರಾಂಚ್) (ಕೇಡರ್ ಅಂಡ್ ರಿಕ್ರೂಟ್‌ಮೆಂಟ್) (ತಿದ್ದುಪಡಿ) ನಿಯಮಗಳು, 2008 ರನ್ವಯ ನೇರನೇಮಕಾತಿ ಮೂಲಕ ಭರ್ತಿಮಾಡಲು ಅರ್ಹ ಹಾಗೂ ಆಸಕ್ತ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆನ್‌ಲೈನ್‌ನಲ್ಲಿ ಅಹ್ವಾನಿಸಲಾಗಿದೆ.

**1. ಹುದ್ದೆಗಳ ವಿವರ, ವಿದ್ಯಾರ್ಹತೆ ಮತ್ತು ವೇತನಶ್ರೇಣಿ :**

| ಕ್ರ. ಸಂ. | ಹುದ್ದೆಯ ಹೆಸರು | ಒಟ್ಟು ಖಾಲಿ ಹುದ್ದೆಗಳು | ವಿದ್ಯಾರ್ಹತೆ | ವೇತನಶ್ರೇಣಿ |
|---|---|---|---|---|
| 1 | ಗ್ರಾಮಲೆಕ್ಕಿಗರು (ನಾಡಕಛೇರಿ ಮತ್ತು ಭೂಮಿ ಕೇಂದ್ರಗಳಿಗೆ) | 07 | ಕರ್ನಾಟಕ ಪದವಿಪೂರ್ವ ಶಿಕ್ಷಣ ಮಂಡಳಿ ನಡೆಸುವ ಪಿಯುಸಿ ವಿದ್ಯಾರ್ಹತೆ ಅಥವಾ ಸಿಬಿಎಸ್‌ಇ/ಐಸಿಎಸ್‌ಇ ಮಂಡಳಿಗಳು ಕರ್ನಾಟಕದಲ್ಲಿ ನಡೆಸುವ 12ನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು ಹಾಗೂ ಗಣಕಯಂತ್ರ ವಿದ್ಯಾರ್ಹತೆ ಹೊಂದಿದ್ದು Computer Fundamentals MS WINDOWS, MS WORD, MS EXCEL, MS-ACCESS, POWER POINT & INTERNET ಜ್ಞಾನ ಹೊಂದಿರುವ ಬಗ್ಗೆ ಅಂಗೀಕೃತ ಸಂಸ್ಥೆಯಿಂದ ಪ್ರಮಾಣಪತ್ರಗಳನ್ನು ಪಡೆದಿರಬೇಕು | 11600–200–12000–250–13000–300–14200–350–15600–400–17200–450–19000–500–21000 |

| ಕ್ರ. ಸಂ. | ಹುದ್ದೆಯ ಹೆಸರು | ಒಟ್ಟು ಖಾಲಿ ಹುದ್ದೆಗಳು | ವಿದ್ಯಾರ್ಹತೆ | ವೇತನಶ್ರೇಣಿ |
|---|---|---|---|---|
| 2 | ಗ್ರಾಮಲೆಕ್ಕಿಗರು (ಕಂದಾಯ ವೃತ್ತಗಳಿಗೆ) | 49 | ಕರ್ನಾಟಕ ಪದವಿಪೂರ್ವ ಶಿಕ್ಷಣ ಮಂಡಳಿ ನಡೆಸುವ ಪಿಯುಸಿ ವಿದ್ಯಾರ್ಹತೆ ಅಥವಾ ಸಿಬಿಎಸ್‌ಇ/ಐಸಿಎಸ್‌ಇ ಮಂಡಳಿಗಳು ಕರ್ನಾಟಕದಲ್ಲಿ ನಡೆಸುವ 12ನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು | |

**ಷರಾ:** Must have passed Pre-University Examiniation in Karnataka State Board or 12$^{th}$ standard examination conducted by Central Board of Secondary Education or ICSE in Karnataka State. (Notification No. RD 299 BSC 2006 dt: 24/7/09)

ಮೇಲ್ಕಂಡ 3 ಶಿಕ್ಷಣ ಮಂಡಳಿಗಳ ಹೊರತು ಇನ್ನಿತರೆ ಯಾವುದೇ ಶಿಕ್ಷಣ ಮಂಡಳಿಗಳಿಂದ / ಇತರೆ ರಾಜ್ಯಗಳ ಶಿಕ್ಷಣ ಮಂಡಳಿಗಳಿಂದ ಪಡೆದ ವಿದ್ಯಾರ್ಹತೆ ಅಥವಾ ಅಂಕಪಟ್ಟಿಯನ್ನು ನೇಮಕಾತಿಗಾಗಿ ಪರಿಗಣಿಸಲಾಗುವುದಿಲ್ಲ.

**2. ಭರ್ತಿ ಮಾಡಬೇಕಾದ ಹುದ್ದೆಗಳ ಮೀಸಲಾತಿ ವರ್ಗೀಕರಣ**

ಸರ್ಕಾರದ ಆದೇಶ ಸಂಖ್ಯೆ ಸಿಆಸುಇ.08 ಸೆಹಿಮ 95 ದಿನಾಂಕ 20/6/95 ರ ಅನ್ವಯ ನೇರ ಮೀಸಲಾತಿ ರೋಸ್ಟರ್ ಸಂಖ್ಯೆ 66 ರಿಂದ 21 (ಒಟ್ಟು 56 ಹುದ್ದೆಗಳು) ರವರೆಗಿನ ರೋಸ್ಟರ್ ಬಿಂದುಗಳನ್ನು ಪರಿಗಣಿಸಲಾಗಿದೆ.

**ಭಾಗ–1**

**ನಾಡಕಛೇರಿ ಹಾಗೂ ಭೂಮಿ ಕೇಂದ್ರಗಳಿಗೆ – 07 ಹುದ್ದೆಗಳು**

**ರೋಸ್ಟರ್ ಬಿಂದು 66 ರಿಂದ 72 ರವರೆಗೆ**

| ಕ್ರ.ಸಂ | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಅಂಗವಿಕಲ | ಮಾಜಿಸೈನಿಕ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|
| 1 | ಸಾಮಾನ್ಯ ಅರ್ಹತೆ | – | 01 | 02 | 01 | – | – | – | 04 |
| 2 | ಪರಿಶಿಷ್ಟ ಜಾತಿ | – | – | 01 | – | – | – | – | 01 |
| 3 | ಪರಿಶಿಷ್ಟ ಪಂಗಡ | – | – | 01 | – | – | – | – | 01 |
| 4 | ಪ್ರವರ್ಗ 1 | – | – | – | – | – | – | – | – |
| 5 | ಪ್ರವರ್ಗ 2(ಎ) | – | – | 01 | – | – | – | – | 01 |
| 6 | ಪ್ರವರ್ಗ 2(ಬಿ) | – | – | – | – | – | – | – | – |
| 7 | ಪ್ರವರ್ಗ 3(ಎ) | – | – | – | – | – | – | – | – |
| 8 | ಪ್ರವರ್ಗ 3(ಬಿ) | – | – | – | – | – | – | – | – |
| **ಒಟ್ಟು** | | – | **01** | **05** | **01** | – | – | – | **07** |

**ಭಾಗ–2**

**ಕಂದಾಯ ವೃತ್ತಗಳಿಗೆ – 49 ಹುದ್ದೆಗಳು, ರೋಸ್ಟರ್ ಬಿಂದು 73 ರಿಂದ 21 ರವರೆಗೆ**

| ಕ್ರ.ಸಂ | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಅಂಗವಿಕಲ | ಮಾಜಿಸೈನಿಕ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|
| 1 | ಸಾಮಾನ್ಯ ಅರ್ಹತೆ | 05 | 07 | 06 | 01 | 03 | 01 | 01 | 24 |
| 2 | ಪರಿಶಿಷ್ಟ ಜಾತಿ | 02 | 02 | 02 | – | 01 | – | – | 07 |
| 3 | ಪರಿಶಿಷ್ಟ ಪಂಗಡ | 01 | – | – | – | – | – | – | 01 |
| 4 | ಪ್ರವರ್ಗ 1 | – | 01 | 01 | – | – | – | – | 02 |

| ಕ್ರ.ಸಂ | ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಅಂಗವಿಕಲ | ಮಾಜಿಸೈನಿಕ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|
| 5 | ಪ್ರವರ್ಗ 2(ಎ) | 02 | 02 | 02 | – | 01 | – | – | 07 |
| 6 | ಪ್ರವರ್ಗ 2(ಬಿ) | – | 01 | 01 | – | – | – | – | 02 |
| 7 | ಪ್ರವರ್ಗ 3(ಎ) | 01 | 01 | 01 | – | – | – | – | 03 |
| 8 | ಪ್ರವರ್ಗ 3(ಬಿ) | 01 | – | 01 | – | 01 | – | – | 03 |
| ಒಟ್ಟು | | **12** | **14** | **14** | **01** | **06** | **01** | **01** | **49** |

**3. ಅಭ್ಯರ್ಥಿಗಳಿಗೆ ಸೂಚನೆ**

1. **ಅರ್ಜಿ ನಮೂನೆ:**

ಅರ್ಹ ಅಭ್ಯರ್ಥಿಗಳು ಅರ್ಜಿಗಳನ್ನು ಈ ಕೆಳಕಂಡ ವೈಬ್‌ಸೈಟ್‌ನಲ್ಲಿ ಆನ್‌ಲೈನ್ (online) ಮೂಲಕ ಮಾತ್ರ ಸಲ್ಲಿಸಬೇಕಾಗಿರುತ್ತದೆ. ಅರ್ಜಿಯನ್ನು ಜಿಲ್ಲಾಧಿಕಾರಿಗಳ ಕಛೇರಿಯಿಂದ ಒದಗಿಸಲಾಗುವುದಿಲ್ಲ. ಹಾಗೂ ಯಾವುದೇ ಕಾರಣಕ್ಕೂ ನೊಂದಾಯಿತ ಅಂಚೆ, ಸಾಮಾನ್ಯ ಅಂಚೆ, ಕೊರಿಯರ್ ಅಥವಾ ಇಮೇಲ್ ಮೂಲಕ ಅಥವಾ ಇನ್ನಿತರೆ ಯಾವುದೇ ರೂಪದಲ್ಲಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಭಾಗ–1 ಮತ್ತು ಭಾಗ–2 ರಲ್ಲಿನ ವರ್ಗೀಕರಣದಲ್ಲಿ ಕಂಡಂತೆ ಗ್ರಾಮಲೆಕ್ಕಿಗರ ಎರಡೂ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಬಯಸುವ ಅಭ್ಯರ್ಥಿಗಳು ಪ್ರತ್ಯೇಕವಾಗಿ ಎರಡು ಅರ್ಜಿಗಳನ್ನು ಸಲ್ಲಿಸತಕ್ಕದ್ದು.

**ವೆಬ್‌ಸೈಟ್ http://kolar-va.kar.nic.in**

**ಅರ್ಜಿ ಸಲ್ಲಿಸುವ ವಿಧಾನ :**

ಅಭ್ಯರ್ಥಿಯು, ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ರವರ ಮೇಲ್ಕಂಡ ಅಧಿಕೃತ ವೆಬ್‌ಸೈಟ್‌ನಲ್ಲಿ ಆನ್‌ಲೈನ್ ಮುಖಾಂತರ ಪ್ರವೇಶಿಸಿದಾಗ ಕಂಡು ಬರುವ **"ಗ್ರಾಮ ಲೆಕ್ಕಿಗರ ನೇರ ನೇಮಕಾತಿ ಅರ್ಜಿ"** ಎಂಬುದರ ಮೇಲೆ ಕ್ಲಿಕ್ ಮಾಡಿದಲ್ಲಿ ಕಂಪ್ಯೂಟರ್ ಪರದೆಯ ಮೇಲೆ ಕಾಣುವ ಅರ್ಜಿಯನ್ನು ಭರ್ತಿ ಮಾಡಬೇಕು. ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಯು submit button ನ್ನು ಒತ್ತಿದರೆ ಅರ್ಜಿ ಸಂಖ್ಯೆ (reference number) ಸೃಷ್ಟಿಯಾಗುತ್ತದೆ. ಆನ್‌ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ (acknowledgement slip) ಮತ್ತು ಚಲನ್‌ನ ದ್ವಿಪ್ರತಿಗಳನ್ನು ತೆಗೆದುಕೊಳ್ಳತಕ್ಕದ್ದು, ಈ ಚಲನ್ ಅನ್ನು ಅರ್ಜಿ ಶುಲ್ಕದೊಂದಿಗೆ **ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನ** ಯಾವುದೇ ಶಾಖೆಯಲ್ಲಿ ಪಾವತಿಸಬಹುದು. ಪಾವತಿಸುವಾಗ ಚಲನ್‌ನಲ್ಲಿ ಅರ್ಜಿಯ ಸಂಖ್ಯೆ (reference number) ಮತ್ತು ಅಭ್ಯರ್ಥಿಯ ಹೆಸರು ಸರಿಯಾಗಿ ನಮೂದಾಗಿದೆಯೇ? ಎಂಬುದನ್ನು ಅಭ್ಯರ್ಥಿಯು ಪರಿಶೀಲಿಸಿ ದೃಢಪಡಿಸಿಕೊಳ್ಳತಕ್ಕದ್ದು. ಅಭ್ಯರ್ಥಿಗಳು ಸ್ವೀಕೃತಿ ಪತ್ರವನ್ನು ಮತ್ತು ಚಲನ್‌ಪಾವತಿಯ ಒಂದು ಪ್ರತಿಯನ್ನು ಕಡ್ಡಾಯವಾಗಿ ತಮ್ಮ ಬಳಿ ಇರಿಸಿಕೊಳ್ಳತಕ್ಕದ್ದು. ಅರ್ಜಿ ಶುಲ್ಕದ ಜೊತೆಗೆ ಬ್ಯಾಂಕ್ ಸರ್ವೀಸ್ ಚಾರ್ಜ್‌ನ್ನು ಸಹಾ ಅಭ್ಯರ್ಥಿಗಳು ಬ್ಯಾಂಕ್‌ಗೆ ಪಾವತಿಸತಕ್ಕದ್ದು. ಈ ದಾಖಲೆಗಳನ್ನು ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನೆಗೆ ನಿಗಧಿಪಡಿಸಿದ ದಿನಾಂಕದಂದು ಹಾಜರುಪಡಿಸತಕ್ಕದ್ದು.

**ಆನ್‌ಲೈನ್ ಮೂಲಕ ಶುಲ್ಕದೊಂದಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 21/10/2016 ಆಗಿರುತ್ತದೆ.**

2. **ಅರ್ಜಿಶುಲ್ಕದ ವಿವರ:**

1. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಹಾಗೂ ಮಹಿಳಾ ಅಭ್ಯರ್ಥಿಗಳಿಗೆ ₹. 100/– ಗಳು ಮಾತ್ರ
2. ಹಾಗೂ ಇತರರಿಗೆ ₹. 200/– ಗಳು ಮಾತ್ರ.

ನಿಗದಿತ ಶುಲ್ಕವನ್ನು ನಿಗಧಿಪಡಿಸಿದ ಕೊನೆಯ ದಿನಾಂಕಕ್ಕೆ ಮುಂಚೆ ಪಾವತಿ ಮಾಡಿ, ಸದರಿ ವೆಬ್‌ಸೈಟ್‌ನಲ್ಲಿ ಶುಲ್ಕ ಪಾವತಿಸಿದ ಚಲನ್ ವಿವರಗಳನ್ನು ಅಪ್‌ಲೋಡ್ ಮಾಡಲು ತಿಳಿಸಿದೆ. ನಿಗದಿತ ಸಮಯದೊಳಗಾಗಿ, ನಿಗದಿತ ಶುಲ್ಕ ಪಾವತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

4. **ವಯೋಮಿತಿ :–**

ಅರ್ಜಿಗಳನ್ನು ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ) **ಕನಿಷ್ಟ** 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ) **ಗರಿಷ್ಟ ವಯೋಮಿತಿ ಈ ಕೆಳಕಂಡಂತಿರತಕ್ಕದ್ದು.**

1. ಸಾಮಾನ್ಯ ವರ್ಗ 35 ವರ್ಷ
2. 2ಎ, 2ಬಿ, 3ಎ, 3ಬಿ 38 ವರ್ಷ
3. ಪಜಾ/ ಪಪಂ/ ಪ್ರವರ್ಗ–1 40 ವರ್ಷ

| | |
|---|---|
| 4. ವಿಧವೆಯರು / ಅಂಗವಿಕಲರು | ಚಾಲ್ತಿಯಲ್ಲಿ ನಿಗಧಿಪಡಿಸಿರುವ ವಯೋಮಿತಿಗೆ 10 ವರ್ಷ ಹೆಚ್ಚಿಗೆ ಸೇರಿಸಿಕೊಳ್ಳಲಾಗುವುದು. |
| 5. ಮಾಜಿ ಸೈನಿಕರು | ಚಾಲ್ತಿಯಲ್ಲಿ ನಿಗಧಿಪಡಿಸಿರುವ ವಯೋಮಿತಿಗೆ ಸಶಸ್ತ್ರದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವವರೋ ಅದಕ್ಕೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷ. |

ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಅಭ್ಯರ್ಥಿಯ ಜನ್ಮ ದಿನಾಂಕವನ್ನು ತೋರಿಸುವ ಶಾಲಾ ದಾಖಲಾತಿ ವಹಿ ಪ್ರತಿ, ವರ್ಗಾವಣೆ ಪ್ರಮಾಣಪತ್ರ (ಟಿ.ಸಿ.) ಅಥವಾ ಕ್ಯುಮ್ಯುಲೇಟೀವ್ ರೆಕಾರ್ಡ್‌ನಲ್ಲಿ ನಮೂದಿಸಿರುವಂತೆ ಜನ್ಮದಿನಾಂಕವನ್ನು ಪರಿಗಣಿಸಲಾಗುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 6 ರಂತೆ ಗರಿಷ್ಠ ವಯೋಮಿತಿಯನ್ನು ಈ ಮುಂದಿನ ಪ್ರಕರಣಗಳಲ್ಲಿ ಹೇಳಿರುವಷ್ಟರ ಮಟ್ಟಿಗೆ ಹೆಚ್ಚಿಸಲು ಅವಕಾಶವಿದೆ.

ಎ) ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪಿಸಲಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಅಡಿಯಲ್ಲಿ ಸರ್ಕಾರದಿಂದ ಸ್ಥಾಪಿತವಾಗಿದ್ದು ಮತ್ತು ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ನಿಗಮದ ಅಡಿಯಲ್ಲಿ ಹುದ್ದೆಯನ್ನು ಧಾರಣ ಮಾಡಿರುವ ಅಥವಾ ಧಾರಣ ಮಾಡಿದ ಅಭ್ಯರ್ಥಿಯ ಸಂದರ್ಭದಲ್ಲಿ ಆತ ಅಂಥ ಹುದ್ದೆಯನ್ನು ಧಾರಣೆ ಮಾಡಿರುವಷ್ಟು ಅಥವಾ ಧಾರಣೆ ಮಾಡಿದಷ್ಟು ಅಥವಾ (ಹತ್ತು) ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ಬಿ) ಈ ರಾಜ್ಯದಲ್ಲಿರುವ ಭಾರತ ಸರ್ಕಾರ ಜನಗಣತಿ ಸಂಸ್ಥೆಯಲ್ಲಿ ಹುದ್ದೆಯನ್ನು ಧಾರಣೆ ಮಾಡಿರುವ ಅಥವಾ ಧಾರಣ ಮಾಡಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಅಂಥ ಹುದ್ದೆಯನ್ನು ಆತನು ಧಾರಣೆ ಮಾಡಿರುವಷ್ಟು ಅಥವಾ ಧಾರಣೆ ಮಾಡಿದಷ್ಟು ವರ್ಷಗಳು ಅಥವಾ ಐದು ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ಸಿ) ಜೀತ ಕಾರ್ಮಿಕನಾಗಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಹತ್ತು ವರ್ಷಗಳು.

ಡಿ) **ಮಾಜಿ ಸೈನಿಕ:** ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಸಶಸ್ತ್ರದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

**ವಿವರಣೆ:** (ಎ) ಮಾಜಿ ಸೈನಿಕ ಎಂದರೆ ಕೇಂದ್ರದ ನಿಯತ ಸೇನೆಯಲ್ಲಿ ನೌಕಾಪಡೆಯಲ್ಲಿ ಮತ್ತು ವಾಯುಪಡೆಯಲ್ಲಿ ಯಾವುದೇ ದರ್ಜೆಯಲ್ಲಿ (ಯೋಧನಾಗಿ ಅಥವಾ ಯೋಧನಾಗಿಲ್ಲದೆ) ಸೇವೆ ಸಲ್ಲಿಸಿರುವ ವ್ಯಕ್ತಿ ಎಂದು ಅರ್ಥ, ಇದು ರಕ್ಷಣಾ ಭದ್ರತಾ ದಳ, ಸಾಮಾನ್ಯ ಮೀಸಲು ಇಂಜಿನಿಯರಿಂಗ್ ಪಡೆ, ಲೋಕಸಹಾಯಕ ಸೇನಾ ಮತ್ತು ಅರೆ ಮಿಲಿಟರಿ ಪಡೆಯಲ್ಲಿ ಸೇವೆ ಸಲ್ಲಿಸಿರುವ ವ್ಯಕ್ತಿಯನ್ನು ಮತ್ತು

**ಅ)** ನಿವೃತ್ತಿ ವೇತನವನ್ನು ಗಳಿಸಿದ ತರುವಾಯ ಅಂಥ ಸೇವೆಯಿಂದ ನಿವೃತ್ತನಾಗುವ ವ್ಯಕ್ತಿಯನ್ನು ಅಥವಾ

**ಆ)** ಸೈನಿಕ ಸೇವೆಯಿಂದ ಉಂಟಾದ ವೈದ್ಯಕೀಯ ಕಾರಣಗಳು ಅಥವಾ ಆತನ ನಿಯಂತ್ರಣ ಮೀರಿದ ಪರಿಸ್ಥಿತಿಗಳ ಮೇಲೆ ಅಂಥಸೇವೆಯಿಂದ ಬಿಡುಗಡೆ ಮಾಡಿರುವ ಮತ್ತು ವೈದ್ಯಕೀಯ ಅಥವಾ ಇತರ ಅಸಮರ್ಥನಾ ನಿವೃತ್ತಿ ವೇತನವನ್ನು ನೀಡಲಾಗಿರುವ ವ್ಯಕ್ತಿಯನ್ನು ಅಥವಾ

**ಇ)** ಆತನ ವೈಯಕ್ತಿಕ ಕೋರಿಕೆಯ ಮೇಲಲ್ಲದೆ ಸಿಬ್ಬಂದಿ ಸಂಖ್ಯೆಯ ಕಡಿತದ ಪ್ರತಿಫಲವಾಗಿ ಅಂಥ ಸೇವೆಯಿಂದ ಆತನನ್ನು ಬಿಡುಗಡೆಗೊಳಿಸಿರುವ ವ್ಯಕ್ತಿಯನ್ನು ಅಥವಾ

**ಈ)** ಆತನ ವೈಯಕ್ತಿಕ ಕೋರಿಕೆ ಮೇಲಲ್ಲದೆ ಅಥವಾ ದುರ್ವರ್ತನೆ ಅಥವಾ ಅದಕ್ಷತೆಯ ಕಾರಣದಿಂದ ವಜಾಗೊಳಿಸಿರುವ ಅಥವಾತೆಗೆದುಹಾಕುವ ಮೂಲಕವಲ್ಲದೆ ಅನ್ಯಥಾ ನಿಯೋಜಿಸಲಾದ ನಿರ್ದಿಷ್ಟ ಅವಧಿ ಮುಕ್ತಾಯವಾದ ತರುವಾಯ ಅಂಥ ಸೇವೆಯಿಂದ ಬಿಡುಗಡೆಗೊಳಿಸಿರುವ ಮತ್ತು ಉಪದಾನ ನೀಡಿರುವ ವ್ಯಕ್ತಿಯನ್ನು

**– ಒಳಗೊಳ್ಳುವುದಿಲ್ಲ.**

ಆದರೆ ಪ್ರಾದೇಶಿಕ ಸೇನೆಯ ಮುಂದಿನ ಪ್ರವರ್ಗಗಳ ಸಿಬ್ಬಂದಿಯನ್ನು ಎಂದರೆ

**(i)** ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು

**(ii)** ಸೈನಿಕ ಸೇವೆಯ ಕಾರಣದಿಂದ ಅಂಗವಿಕಲರಾದ ವ್ಯಕ್ತಿಗಳನ್ನು ಮತ್ತು

**(iii)** ಶೌರ್ಯ ಪ್ರಶಸ್ತಿ ವಿಜೇತರನ್ನು

**– ಒಳಗೊಳ್ಳುತ್ತದೆ.**

**ವಿವರಣೆ:** ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ, ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರಿಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ. ಮಾಜಿ ಸೈನಿಕರೆಂಬ ಬಗ್ಗೆ ಸಕ್ರಮ ಪ್ರಾಧಿಕಾರದಿಂದ ಪರಿಶೀಲನೆ ಪ್ರಮಾಣಪತ್ರ ಪಡೆದ ನಂತರವೇ ನೇಮಕಾತಿ ಆದೇಶ ನೀಡಲಾಗುವುದು.

**5. ಜಾತಿ ಮೀಸಲಾತಿ ಪ್ರಮಾಣಪತ್ರಗಳು :**

ಜಾತಿ ಮೀಸಲಾತಿ ಕೋರಬಯಸುವ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಅಭ್ಯರ್ಥಿಗಳು ನಮೂನೆ 'ಡಿ' ನಲ್ಲಿ, ಪ್ರವರ್ಗ–1 ರ ಅಭ್ಯರ್ಥಿಗಳು ನಮೂನೆ 'ಇ' ನಲ್ಲಿ ಹಾಗೂ 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ 'ಎಫ್' ನಲ್ಲಿ ಸಂಬಂಧಿತ ತಹಸೀಲ್ದಾರ್ ರವರಿಂದ ಪ್ರಮಾಣಪತ್ರವನ್ನು ಪಡೆದಿರಬೇಕು. ಈ ಪ್ರಮಾಣಪತ್ರವು ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗಧಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು ಹಾಗೂ ಚಾಲ್ತಿಯಲ್ಲಿರಬೇಕು ನಂತರ ಪಡೆದ ಪ್ರಮಾಣಪತ್ರಗಳನ್ನು ಪರಿಗಣಿಸುವುದಿಲ್ಲ.

**6. ಗ್ರಾಮೀಣ ಅಭ್ಯರ್ಥಿಗಳು:**

ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಗಧಿಪಡಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ. ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10 ನೇ ತರಗತಿಯವರೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿದ ಬಗ್ಗೆ ವ್ಯಾಸಂಗದ ಪ್ರಮಾಣಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದುಕೊಂಡಿರಬೇಕು. ಹಾಗೂ ಸಂಬಂಧಿತ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲ್ರುಜು ಮಾಡಿಸಿರಬೇಕು. ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿ ಪಡೆಯಲು ಅರ್ಹರು. **ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2 ರ ಪ್ರಮಾಣ ಪತ್ರವಲ್ಲದೆ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ** ಸಂಬಂಧಿಸಿದ ತಾಲ್ಲೂಕು ತಹಸೀಲ್ದಾರ್ ರವರಿಂದ ಪಡೆದುಕೊಂಡಿರಬೇಕು.

ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ–1, ಪವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಜಾತಿ, ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2 ರಲ್ಲಿ ನಿಗಧಿತ ಪ್ರಾಧಿಕಾರದಿಂದ ಪಡೆದು, ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲು ರುಜು ಮತ್ತು ಮೊಹರು ಮಾಡಿಸಿಕೊಂಡು ಮೂಲ ದಾಖಲೆಗಳ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.

**7. ಮಾಜಿ ಸೈನಿಕರ ಕುಟುಂಬದ ಅಭ್ಯರ್ಥಿಗಳು :**

ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 9(1) ರ ರನ್ವಯ ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗವಿಕಲರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿಗಳಿಂದ/ ಸಕ್ಷಮ ಪ್ರಾಧಿಕಾರದಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಉಪನಿಯಮದಡಿ ಕುಟುಂಬದ ಸದಸ್ಯರು ಎಂದರೆ ಪತ್ನಿ ಅಥವಾ ಪತಿ ಮತ್ತು ಪೂರ್ಣ ಅವಲಂಬಿತ ಮಕ್ಕಳು ಮತ್ತು ಮಲಮಕ್ಕಳು. ಆದರೆ ಅಂತಹವರಿಗೆ ವಯೋಮಿತಿ ಸಡಿಲಿಕೆ ನೀಡಲಾಗುವುದಿಲ್ಲ.

**8. ಅಂಗವಿಕಲ ಅಭ್ಯರ್ಥಿಗಳು :**

ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 9(1–ಎ) ರ ಅನ್ವಯ ರಾಜ್ಯ ಸಿವಿಲ್ ಸೇವೆಯಲ್ಲಿನ ಗ್ರೂಪ್ ಸಿ ಹುದ್ದೆಗಳ ನೇರನೇಮಕಾತಿಯಲ್ಲಿ ಅಂಗವಿಕಲರಿಗೆ ಶೇ. 5 ರಷ್ಟು ಸಮತಳ ಮೀಸಲಾತಿ ಕಲ್ಪಿಸಲಾಗಿದೆ. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ. 128 ಸೆನೆನಿ 2006 ದಿ: 1/8/09 ರಂತೆ ನಿಗದಿಪಡಿಸಿದ ವಿವಿಧ ರೀತಿಯ ವೈಕಲ್ಯಗಳಿಗೆ ನಿಗಧಿತ ರೋಸ್ಟರ್ ಕ್ರಮಾಂಕವನ್ನು ಅನುಸರಿಸಿ ಮೀಸಲಾತಿ ನೀಡಲಾಗುವುದು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಎ. 115. ಸೆನೆನಿ. 2005, **ದಿನಾಂಕ 19/11/2005 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಮೂಲ ಪ್ರಮಾಣಪತ್ರವನ್ನು** ಹಾಗೂ ದೃಢೀಕೃತ ಪ್ರತಿಯನ್ನು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು. ಬೇರೆ ಯಾವುದೇ ನಮೂನೆಗಳಲ್ಲಿ ಪಡೆಯಲಾಗಿರುವ ಪ್ರಮಾಣಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

ಸರ್ಕಾರದ ಸುತ್ತೋಲೆ ಸಂಖ್ಯೆ ಕಂಇ 100 ಬಿಎಸ್‌ಸಿ 2011 ದಿನಾಂಕ: 29/6/2012, ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 52 ಎಸ್‌ಆರ್‌ಆರ್ 99, ದಿನಾಂಕ 29/11/2002 ಮತ್ತು ತಿದ್ದುಪಡಿ ಅಧಿಸೂಚನೆ ಸಂಖ್ಯೆ ಡಿಪಿಎಆರ್ 54 ಎಸ್‌ಆರ್‌ಆರ್ 2012, ದಿನಾಂಕ: 23/6/2012 ರ ರೀತ್ಯಾ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನಿಗಧಿತ ಪ್ರಮಾಣದ ಅಂಗವೈಕಲ್ಯವುಳ್ಳ ಅಂಗವಿಕಲರ ಮೀಸಲಾತಿಯನ್ನು ಈ ಕೆಳಕಂಡ ವರ್ಗಗಳಿಗೆ ಮಾತ್ರ ಪರಿಗಣಿಸಲಾಗುವುದು.

1. ಶ್ರವಣ ದೋಷವುಳ್ಳವರು (Hearing Impaired)
2. ದೈಹಿಕ ಅಂಗವಿಕಲರು (Locomotor disability) ಚಲನವಲನ ವೈಕಲ್ಯತೆ ಇರುವವರು
3. ಕುಷ್ಠರೋಗದಿಂದ ಗುಣಮುಖರಾದವರು (Leprosy Cured) / ಬುದ್ಧಿಮಾಂದ್ಯತೆ / ಮಾನಸಿಕ ಅಸ್ವಸ್ಥತೆ ಹೊಂದಿರುವವರಿಗೆ

ಸರ್ಕಾರಿ ಆದೇಶ ನಂ. ಡಿಪಿಎಆರ್ 07 ಸೇಸೇಆ 94 ದಿನಾಂಕ **13/9/1995 ರಲ್ಲಿ ನಿಗಧಿಪಡಿಸಿರುವ ವೈದ್ಯಕೀಯ ಪ್ರಮಾಣಪತ್ರವನ್ನು ಸಕ್ಷಮ ವೈದ್ಯಾಧಿಕಾರಿಗಳಿಂದ** ಪಡೆದಿರಬೇಕು ಮತ್ತು ಅಂಗವಿಕಲತೆ ಪ್ರಮಾಣವು ಕನಿಷ್ಠ ಶೇ. 40 ಕ್ಕಿಂತ ಕಡಿಮೆ ಇಲ್ಲದಂತೆ ಇರಬೇಕು. ಈ ಪ್ರಮಾಣಪತ್ರವನ್ನು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಅಭ್ಯರ್ಥಿಯು ಪಡೆದುಕೊಂಡಿರಬೇಕು.

**9. ಕನ್ನಡ ಮಾಧ್ಯಮ ಅಭ್ಯರ್ಥಿಗಳು:**

ಸರ್ಕಾರದ ಅಧಿಸೂಚನೆ ಸಂ. ಡಿಪಿಎಆರ್ 71 ಎಸ್‌ಆರ್‌ಆರ್ 2001 ದಿನಾಂಕ 24–10–2002 ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 9(1)(ಸಿ) ರನ್ವಯ ಅಭ್ಯರ್ಥಿಯ 1 ರಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಕ್ಷೇತ್ರಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿ ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.

**10. ಯೋಜನಾ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು :**

ಕರ್ನಾಟಕ ನಾಗರಿಕ ಸೇವೆ (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ನಿಯಮ 9(1ಎಎ) ರನ್ವಯ ಯೋಜನೆಗಳಿಂದ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಸೀಲ್ದಾರ್ ರವರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 23 ಎಸ್‌ಆರ್‌ಆರ್ 99 ದಿನಾಂಕ 23/11/2000 ರನ್ವಯ ಹಾಗೂ ಸರ್ಕಾರದ ಆದೇಶದ ಸಂಖ್ಯೆ ಸಿಆಸುಇ. 44 ಸೆನೆನಿ 2001 ದಿನಾಂಕ 27/07/2001 ರಲ್ಲಿ ತಿಳಿಸಿರುವಂತೆ ನಿಗಧಿತ ನಮೂನೆಯಲ್ಲಿ ದೃಢೀಕರಣ ಪತ್ರ ಪಡೆದುಕೊಂಡಿರಬೇಕು.

**11. ಅರ್ಹತಾ ಷರತ್ತುಗಳು :**

(ಅ) ಅರ್ಜಿದಾರರು ಭಾರತೀಯ ಪೌರನಾಗಿರತಕ್ಕದ್ದು.

(ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತನಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವವಿರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

(ಇ) ದೈಹಿಕವಾಗಿ/ಮಾನಸಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯು ವರದಿ ನೀಡಿದಲ್ಲಿ ಅಭ್ಯರ್ಥಿಯು ಹುದ್ದೆಗೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

**12. ಪ್ರಮುಖವಾದ ಸೂಚನೆಗಳು :**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣಪತ್ರಗಳನ್ನು ಸಕ್ಷಮ ಪ್ರಾಧಿಕಾರದಿಂದ ಪಡೆದು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.

- ಹುದ್ದೆಗೆ ನಿಗಧಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ, ಪ್ರಮಾಣ ಪತ್ರ, ಕಂಪ್ಯೂಟರ್ ವಿದ್ಯಾರ್ಹತೆ ಪ್ರಮಾಣಪತ್ರಗಳನ್ನು ಸಲ್ಲಿಸತಕ್ಕದ್ದು.
- ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ ಅಂಕಪಟ್ಟಿ ಇನ್ನಿತರೆ ಶಾಲಾ ದಾಖಲೆಗಳ ಅಧಿಕೃತ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು.
- ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿಹೊಂದಿದ ಬಗ್ಗೆ ಹಾಗೂ ಅವರು ಸಾಮಾನ್ಯ ನೇಮಕಾತಿ ನಿಯಮಗಳನ್ವಯ ಮಾಜಿ ಸೈನಿಕ ಎಂಬ ವ್ಯಾಖ್ಯೆಯಡಿ ಬರುತ್ತಾರೆಂಬ ಬಗ್ಗೆ ಸಕ್ಷಮ ಪ್ರಾಧಿಕಾರ ನೀಡಿರುವ ಪ್ರಮಾಣ ಪತ್ರ. (ಮೀಸಲಾತಿ ಕೋರಿದ್ದಲ್ಲಿ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ–1, ಪವರ್ಗ–2, 2ಎ, 2ಬಿ, 3ಎ, 3ಬಿ ಮೀಸಲಾತಿಯ ಪ್ರಮಾಣ ಪತ್ರಗಳು. (ಮೀಸಲಾತಿ ಕೋರಿದ್ದಲ್ಲಿ)
- ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
- ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ. (ಮೀಸಲಾತಿ ಕೋರಿದ್ದಲ್ಲಿ)
- ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ. (ಮೀಸಲಾತಿ ಕೋರಿದ್ದಲ್ಲಿ)
- ವಿಧವೆಯಾಗಿದ್ದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.
- ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ. (ಮೀಸಲಾತಿ ಕೋರಿದ್ದಲ್ಲಿ)

**13. ದುರ್ನಡತೆ :**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು, ಅಥವಾ ಖೋಟಾ ದಸ್ತಾವೇಜು, ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು, ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು, ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ತಪ್ಪು ಗ್ರಹಿಕೆಯಿಂದ ಅವರ ಅರ್ಹತೆ ಕುರಿತಂತೆ ಈ ಅಧಿಸೂಚನೆಗೆ ಪೂರಕವಲ್ಲದ ಹಾಗೂ ಅಧಿಕೃತವಲ್ಲದ ಶೈಕ್ಷಣಿಕ ದಾಖಲೆಗಳನ್ನು ಸಲ್ಲಿಸಿದ್ದಾರೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಕಂಡು ಬಂದಲ್ಲಿ ಅವನು / ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ, ಹುದ್ದೆಯ ಆಯ್ಕೆಯಿಂದ ಅವರ ಹೆಸರನ್ನು ಕೈಬಿಡಲಾಗುವುದು ಅಥವಾ ನೇಮಕಾತಿ ಆದೇಶವನ್ನು ರದ್ದುಪಡಿಸಲಾಗುವುದು.

**14. ಇತರೆ ಸೂಚನೆಗಳು :**

1. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅರಿವು ಅವಶ್ಯಕತೆ ಕಡ್ಡಾಯವಾಗಿರುತ್ತದೆ.
2. ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವ ಮುನ್ನ ಯಾವುದೇ ಸಂದರ್ಭದಲ್ಲಿ ಹುದ್ದೆಗಳ ಸಂಖ್ಯೆಯನ್ನು ಹೆಚ್ಚು ಮಾಡುವ /ಕಡಿತಗೊಳಿಸುವ / ಮುಂದೆ ಉದ್ಭವವಾಗುವ ಖಾಲಿ ಹುದ್ದೆಗಳನ್ನು ಈ ಆಯ್ಕೆ ಪ್ರಕ್ರಿಯೆಯಲ್ಲಿ ಪರಿಗಣಿಸುವ /ಅಥವಾ ನಿಯಮಾನುಸಾರ ಅಗತ್ಯವಾದ ಯಾವುದೇ ಹೆಚ್ಚುವರಿ ಷರತ್ತುಗಳನ್ನು ವಿಧಿಸುವ ಅಥವಾ ಸಡಿಲಗೊಳಿಸುವ ಅಧಿಕಾರ ಹಾಗೂ ಯಾವುದೇ ಕಾರಣ ನೀಡದೆ ನೇಮಕಾತಿ ಪ್ರಕ್ರಿಯೆಯನ್ನು ರದ್ದುಪಡಿಸುವ ಅಧಿಕಾರವನ್ನು ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ ಹಾಗೂ ಅಧ್ಯಕ್ಷರು, ಗ್ರಾಮಲೆಕ್ಕಾಧಿಕಾರಿಗಳ ನೇಮಕಾತಿ ಹಾಗೂ ಆಯ್ಕೆ ಪ್ರಾಧಿಕಾರ ಕೋಲಾರ ರವರು ಕಾಯ್ದಿರಿಸಿಕೊಂಡಿರುತ್ತಾರೆ.
3. ಸರ್ಕಾರಿ ಇಲಾಖೆಯಲ್ಲಿ / ಸರ್ಕಾರಿಯೇತರ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಯನ್ನು ಇಲಾಖಾ ಮುಖ್ಯಸ್ಥರ ಲಿಖಿತ ಅನುಮತಿ ಪಡೆದು ಸಲ್ಲಿಸುವುದು. ಹಾಗೂ ಸೇವೆಯಲ್ಲಿರುವ ಅಭ್ಯರ್ಥಿಗಳು ಅವರ ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣ ಪತ್ರವನ್ನು (No OBJECTION CERTIFICATE) ಮೂಲ ದಾಖಲಾತಿಗಳ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.
4. ಮೀಸಲಾತಿಯಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಹಾಜರುಪಡಿಸುವ ಎಲ್ಲಾ ಪ್ರಮಾಣ ಪತ್ರಗಳನ್ನು ಸಕ್ಷಮ ಪ್ರಾಧಿಕಾರದಿಂದ ಪರಿಶೀಲನೆಗೊಳಪಡಿಸಿ ಅದರ ಸಿಂಧುತ್ವದ ಬಗ್ಗೆ ದೃಢಿಪಡಿಸಿಕೊಂಡ ನಂತರವೇ ನೇಮಕಾತಿ ಆದೇಶ ನೀಡಲಾಗುವುದು.
5. ಕಾಲೇಜಿನ ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣಪತ್ರ ಹಾಗೂ ಸ್ಥಳೀಯ ಇಬ್ಬರು ಗಣ್ಯವ್ಯಕ್ತಿಗಳಿಂದ ಪಡೆದ 6 ತಿಂಗಳೊಳಗಿನ ಇತ್ತೀಚಿನ ನಡತೆ ಪ್ರಮಾಣಪತ್ರಗಳನ್ನು ದಾಖಲೆಗಳ ಪರಿಶೀಲನೆ ಸಮಯದಲ್ಲಿ ಹಾಜರುಪಡಿಸತಕ್ಕದ್ದು.
6. ಅಭ್ಯರ್ಥಿಗಳು ಆನ್‌ಲೈನ್‌ನಲ್ಲಿ ಪಡೆದ acknowledgement ಹಾಗೂ CHALLAN slip ನ್ನು ಬ್ಯಾಂಕ್‌ನಲ್ಲಿ ಪಾವತಿಸಿದ ನಂತರ ಅಭ್ಯರ್ಥಿಯ ಪ್ರತಿಯನ್ನು ಮಡಚುವುದಾಗಲೀ, ಹರಿಯುವುದಾಗಲೀ ಮಾಡದೇ ಹಾಳಾಗದಂತೆ ಎಚ್ಚರವಹಿಸತಕ್ಕದ್ದು.
7. ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ಗ್ರಾಮಲೆಕ್ಕಿಗರ ನೇಮಕಾತಿ ಮತ್ತು ಆಯ್ಕೆ ಪ್ರಾಧಿಕಾರದ ಅಧ್ಯಕ್ಷರಾದ ಜಿಲ್ಲಾಧಿಕಾರಿ, ಕೋಲಾರ ಜಿಲ್ಲೆ, ಕೋಲಾರ ಇವರು ಕಾಯ್ದಿರಿಸಿಕೊಂಡಿರುತ್ತಾರೆ.
8. ಕರ್ನಾಟಕ ಜನರಲ್ ಸರ್ವಿಸಸ್ (Revenue subordinate branch) (Cadre & Recruitment) (ತಿದ್ದುಪಡಿ) ನಿಯಮಗಳು 2008 ಮತ್ತು ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ ಆರ್‌ಡಿ 299 ಬಿಎಸ್ಸಿ 2006 ದಿನಾಂಕ 24/07/2009 ರ ಪ್ರಕಾರ ಅಭ್ಯರ್ಥಿಯನ್ನು ಅವರು ಕರ್ನಾಟಕ ಪಿ.ಯು.ಸಿ. ಮಂಡಳಿ ಅಥವಾ ಸಿಬಿಎಸ್‌ಸಿ ಅಥವಾ ಐಸಿಎಸ್‌ಇ ಮಂಡಳಿಗಳು ಕರ್ನಾಟಕದಲ್ಲಿ ನಡೆಸುತ್ತಿರುವ 12 ನೇ ತರಗತಿ ಪರೀಕ್ಷೆಯಲ್ಲಿ ಪಡೆದ ಅಂಕಗಳು (on merit) ಮತ್ತು ಮೀಸಲಾತಿ ಆಧಾರದ ಮೇಲೆ ಮಾತ್ರ ಆಯ್ಕೆ ಮಾಡಲಾಗುವುದು. ಇನ್ನಿತರೆ ಶಿಕ್ಷಣ ಮಂಡಳಿಗಳಿಂದ ನೀಡಲಾದ ಪ್ರಮಾಣಪತ್ರಗಳನ್ನು ಹಾಗೂ ಗಳಿಸಿದ ಅಂಕಗಳನ್ನು ಪರಿಗಣಿಸಲಾಗುವುದಿಲ್ಲ. ಅಂಕಗಳು ಸಮಾನವಾಗಿರುವ ಪ್ರಕರಣಗಳಲ್ಲಿ ಅಭ್ಯರ್ಥಿಯ ಜನ್ಮ ದಿನಾಂಕವನ್ನು ಪರಿಗಣಿಸಿ ಅರ್ಹನಾದ ಹಿರಿಯ ಅಭ್ಯರ್ಥಿಯನ್ನು ಪರಿಗಣಿಸಲಾಗುವುದು.
9. ನೇಮಕಾತಿಯು ಸಂಪೂರ್ಣವಾಗಿ ಮೆರಿಟ್ ಮತ್ತು ಮೀಸಲಾತಿ ನಿಯಮಗಳನ್ವಯ ಮಾತ್ರವೇ ನಡೆಯುತ್ತದೆ.
10. ಮೂಲ ದಾಖಲೆಗಳ ಪರಿಶೀಲನೆ ಸಲುವಾಗಿ 1:5 ರ ಅನುಪಾತದಲ್ಲಿ ಮೆರಿಟ್‌ನ್ನು ಆಧರಿಸಿ ಅಭ್ಯರ್ಥಿಗಳನ್ನು ಕರೆಯಲಾಗುವುದು.
11. ಆಯ್ಕೆ ಪ್ರಕ್ರಿಯೆ ಪೂರ್ಣಗೊಳಿಸಿ ತಾತ್ಕಾಲಿಕ ಪಟ್ಟಿ ಪ್ರಕಟಿಸಲಾಗುವುದು ಹಾಗೂ ಅಭ್ಯರ್ಥಿಯ ಹೆಸರು ತಾತ್ಕಾಲಿಕ ಪಟ್ಟಿಯಲ್ಲಿ ನಮೂದಿಸಿದ ಮಾತ್ರಕ್ಕೆ ಅವರ ಆಯ್ಕೆ ಅಂತಿಮವಾಗಿದೆ ಎಂದು ಭಾವಿಸತಕ್ಕದ್ದಲ್ಲ. ಆಯ್ಕೆಯ ಸಂಬಂಧವಾಗಿ ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರ ನಡೆಸಲು ಅವಕಾಶ ಇರುವುದಿಲ್ಲ.
12. ಅಂತಿಮವಾಗಿ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶಗಳನ್ನು ನೀಡುವ ಮುನ್ನ ಯಾವುದೇ ಹಂತದಲ್ಲಿ ಯಾವುದೇ ಕಾರಣ / ಮಾಹಿತಿ ನೀಡದೆ ಈ ನೇಮಕಾತಿ ಪ್ರಕ್ರಿಯೆಯನ್ನು ಮುಂದೂಡುವ ಅಥವಾ ರದ್ದುಪಡಿಸುವ, ತಿದ್ದುಪಡಿ ಅಥವಾ ಸೇರ್ಪಡೆ ಮಾಡುವ ಅಥವಾ ವಿಧಿಸಲಾಗಿರುವ ಯಾವುದೇ ಷರತ್ತನ್ನು ಸಡಿಲಗೊಳಿಸುವ ಅಥವಾ ಹೆಚ್ಚುವರಿ ಷರತ್ತನ್ನು ವಿಧಿಸುವ, ತುಂಬಲಾಗುವ ಹುದ್ದೆಗಳ ಸಂಖ್ಯೆಯನ್ನು ಬದಲಾಯಿಸುವ / ನಿರ್ಣಯಿಸುವ ಅಧಿಕಾರವನ್ನು ಜಿಲ್ಲಾಧಿಕಾರಿಗಳು, ಹಾಗೂ ಗ್ರಾಮಲೆಕ್ಕಿಗರ ನೇಮಕಾತಿ ಮತ್ತು ಆಯ್ಕೆ ಪ್ರಾಧಿಕಾರದ ಅಧ್ಯಕ್ಷರು, ಕೋಲಾರ ಜಿಲ್ಲೆ ರವರು ಕಾಯ್ದಿರಿಸಿಕೊಂಡಿರುತ್ತಾರೆ.

**ಡಾ: ಕೆ.ವಿ. ತ್ರಿಲೋಕ ಚಂದ್ರ**

ಅಧ್ಯಕ್ಷರು,

ಗ್ರಾಮಲೆಕ್ಕಿಗರ ನೇಮಕಾತಿ ಮತ್ತು

ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು,

ಕೋಲಾರ ಜಿಲ್ಲೆ, ಕೋಲಾರ.

**P.R. 145**

**SC - 100**

## ಕಂದಾಯ ಇಲಾಖೆ

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ.

## ಅಧಿಕೃತ ಜ್ಞಾಪನ

**ಸಂ:ಸಿಬ್ಬಂದಿ(1)ಸಿಆರ್:225/2013–14, ದಿನಾಂಕ:02–09–2016**

**ವಿಷಯ :** ಚಾಮರಾಜನಗರ ಜಿಲ್ಲಾ ಕಂದಾಯ ಘಟಕದಲ್ಲಿ 2014–15 ನೇ ಸಾಲಿನಲ್ಲಿ ಖಾಲಿಯಿರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡುವ ಕುರಿತು.

**ಉಲ್ಲೇಖ :**

1. ಸರ್ಕಾರದ ಅಧಿಸೂಚನೆ ಸಂ.ಕಂ.ಇ 299: 2006, ದಿನಾಂಕ: 30–02–2009, 24–07–2009 ಮತ್ತು 08–09–2009.
2. ಈ ಕಛೇರಿಯ ಅಧಿಸೂಚನೆ ಸಮ ಸಂಖ್ಯೆ ದಿನಾಂಕ: 17–11–2014.
3. ಗ್ರಾಮಲೆಕ್ಕಿಗರ ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಸಮಿತಿಯ ನಡವಳಿ ದಿನಾಂಕ: 31–01–2015.
4. ಈ ಕಛೇರಿಯ ಅಧಿಕೃತ ಜ್ಞಾಪನ ಸಮಸಂಖ್ಯೆ ಪತ್ರದ ದಿನಾಂಕ: 23–02–2015. (ಪರಿಶೀಲನಾ ಪಟ್ಟಿ)
5. ಗ್ರಾಮಲೆಕ್ಕಿಗರ ಆಯ್ಕೆ ಮತ್ತು ನೇಮಕಾತಿ ಪ್ರಾಧಿಕಾರ ಸಮಿತಿಯ ನಡವಳಿ ದಿನಾಂಕ: 02–07–2015.
6. ಈ ಕಛೇರಿಯ ಅಧಿಕೃತ ಜ್ಞಾಪನ ಸಮಸಂಖ್ಯೆ ಪತ್ರದ ದಿನಾಂಕ: 08–07–2015. (ತಾತ್ಕಾಲಿಕ ಆಯ್ಕೆ ಪಟ್ಟಿ)
7. ಈ ಕಛೇರಿಯ ಅಧಿಕೃತ ಜ್ಞಾಪನ ಸಮಸಂಖ್ಯೆ ಪತ್ರದ ದಿನಾಂಕ: 24–08–2015. (ಅಂತಿಮ ಆಯ್ಕೆ ಪಟ್ಟಿ ಮತ್ತು ಹೆಚ್ಚುವರಿ ಕಾಯ್ದಿರಿಸಿದ ಆಯ್ಕೆ ಪಟ್ಟಿ)
8. ಈ ಕಛೇರಿಯ ಸಮ ಸಂಖ್ಯೆ ಅಧಿಕೃತ ಜ್ಞಾಪನ ಪತ್ರ ದಿನಾಂಕ: 06–01–2016.

ಚಾಮರಾಜನಗರ ಜಿಲ್ಲೆಯ ಕಂದಾಯ ಇಲಾಖೆಯಲ್ಲಿ ಖಾಲಿಯಿರುವ 50 ಗ್ರಾಮಲೆಕ್ಕಿಗರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಸಲುವಾಗಿ ಕರ್ನಾಟಕ ಸಾಮಾನ್ಯ ಸೇವೆಗಳು (ರೆವಿನ್ಯೂ ಸರ್ಬಾಡಿನೇಟ್ ಬ್ರಾಂಚ್) ಕೇಡರ್ ಅಂಡ್ ರಿಕ್ರೂಟ್‌ಮೆಂಟ್ ನಿಯಮಗಳನ್ವಯ ಉಲ್ಲೇಖ(1) ರಲ್ಲಿನ ಸರ್ಕಾರದ ಅಧಿಸೂಚನೆಯಂತೆ ಉಲ್ಲೇಖ(2)ರ ಈ ಕಛೇರಿಯಿಂದ ಆನ್‌ಲೈನ್ ಮೂಲಕ ಅರ್ಜಿಗಳನ್ನು ಆಹ್ವಾನಿಸಲಾಗಿತ್ತು. ಅದರಂತೆ ಅಭ್ಯರ್ಥಿಗಳಿಂದ ಸ್ವೀಕೃತವಾದ ಅರ್ಜಿಗಳನ್ನು ಆಧರಿಸಿ ಅರ್ಹತೆ ಮತ್ತು ಮೀಸಲಾತಿ ಅನ್ವಯ ವಿಂಗಡಿಸಿ 1:5 ರ ಅನುಪಾತದಲ್ಲಿ ಅರ್ಹ ಅಭ್ಯರ್ಥಿಗಳ ಪರಿಶೀಲನಾ ಪಟ್ಟಿಯನ್ನು ತಯಾರಿಸಿ ಉಲ್ಲೇಖ(4) ರಲ್ಲಿ ಪ್ರಕಟಿಸಲಾಗಿರುತ್ತದೆ.

ಸದರಿ ಪರಿಶೀಲನಾ ಪಟ್ಟಿಯಂತೆ ದಿನಾಂಕ: 08–04–2015, 09–04–2015 ಮತ್ತು 16–05–2015 ರಂದು ಪರಿಶೀಲನೆಗೆ ಹಾಜರಾದ ಅರ್ಹ ಅಭ್ಯರ್ಥಿಗಳ ಮೂಲ ದಾಖಲೆಗಳನ್ನು ಪರಿಶೀಲಿಸಿದೆ. ದಾಖಲೆಗಳ ಪರಿಶೀಲನೆಯಿಂದ ಅಭ್ಯರ್ಥಿಗಳ ಮೆರಿಟ್ ಮತ್ತು ಮೀಸಲಾತಿ ಆಧಾರದಲ್ಲಿ 50 ಅಭ್ಯರ್ಥಿಗಳ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಉಲ್ಲೇಖ(6)ರಂತೆ ಪ್ರಕಟಿಸಲಾಗಿರುತ್ತದೆ. ಈ ತಾತ್ಕಾಲಿಕ ಆಯ್ಕೆ ಪಟ್ಟಿಯ ಬಗ್ಗೆ ಆಕ್ಷೇಪಣೆ/ತಕರಾರು ಅರ್ಜಿಗಳನ್ನು ಸಲ್ಲಿಸಲು ಕಾಲಾವಕಾಶ ನೀಡಲಾಗಿತ್ತು.

ಸದರಿ ತಾತ್ಕಾಲಿಕ ಆಯ್ಕೆಪಟ್ಟಿಗೆ ಬಂದ ಆಕ್ಷೇಪಣೆಗಳನ್ನು ಪರಿಶೀಲಿಸಿ ನಿಯಮಾನುಸಾರ ಕ್ರಮ ಕೈಗೊಳ್ಳಲಾಗಿರುತ್ತದೆ. ಒಟ್ಟು 50 ಅಭ್ಯರ್ಥಿಗಳನ್ನು ಮೆರಿಟ್ ಮತ್ತು ಮೀಸಲಾತಿ ಆಧಾರದ ಮೇರೆ ಅಂತಿಮ ಆಯ್ಕೆ ಪಟ್ಟಿಯನ್ನು ಮತ್ತು ಹೆಚ್ಚುವರಿ ಕಾಯ್ದಿರಿಸಿದ ಆಯ್ಕೆಪಟ್ಟಿಯನ್ನು ಉಲ್ಲೇಖ(7) ರಲ್ಲಿ ಪ್ರಕಟಿಸಲಾಗಿರುತ್ತದೆ. ಅದರಂತೆ ಅಂತಿಮ ಆಯ್ಕೆ ಪಟ್ಟಿಯಲ್ಲಿರುವ 26 ಅಭ್ಯರ್ಥಿಗಳಿಗೆ ಉಲ್ಲೇಖ(8)ರ ಅಧಿಕೃತ ಜ್ಞಾಪನ ಪತ್ರದ ಅದೇಶದಂತೆ ಈ ಜಿಲ್ಲೆ ವ್ಯಾಪ್ತಿಯಲ್ಲಿ ಖಾಲಿ ಇದ್ದ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇಮಕಾತಿ ಮಾಡಿ ಆದೇಶಿಸಲಾಗಿರುತ್ತದೆ.

ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಮೀಸಲಾತಿಗೆ ಅನುಗುಣವಾಗಿ ಅರ್ಹರಿರುವ ಅಭ್ಯರ್ಥಿಗಳನ್ನು ಪರಿಗಣಿಸಿ ಒಟ್ಟು 12 ಜನ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಉಲ್ಲೇಖ(1)ರ ಸರ್ಕಾರದ ಆದೇಶದಂತೆ ಹಾಗೂ ಕರ್ನಾಟಕ ಸಾಮಾನ್ಯ ಸೇವೆಗಳು (ರೆವಿನ್ಯೂ ಸರ್ಬಾಡಿನೇಟ್ ಬ್ರಾಂಚ್) ಕೇಡರ್ ಅಂಡ್ ರಿಕ್ರೂಟ್‌ಮೆಂಟ್ ನಿಯಮಗಳು, 1977 ರ ಮೇರೆಗೆ ಅಂತಿಮ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾಗಿರುವ ಈ ಕೆಳಕಂಡ ಅಭ್ಯರ್ಥಿಯನ್ನು ಗ್ರಾಮಲೆಕ್ಕಿಗರ ಹುದ್ದೆಯ ವೇತನ ಶ್ರೇಣಿಯ 11600–200–12000–250–13000–300–14200–350–15600–400–17200–450–19000–500–21000 ರಲ್ಲಿ ಗ್ರೂಪ್ 'ಸಿ' ವೃಂದದ ಗ್ರಾಮಲೆಕ್ಕಿಗರ ಹುದ್ದೆಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಅವರ ಹೆಸರಿನ ಮುಂದೆ ನಮೂದಿಸಲ್ಪಟ್ಟಿರುವ ಸ್ಥಳ/ಕಛೇರಿ/ವೃತ್ತಕ್ಕೆ ನೇಮಕಾತಿ ಮಾಡಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಮೀಸಲಾತಿ | ನೇಮಕಾತಿ ಮಾಡಿರುವ ಹುದ್ದೆ ಮತ್ತು ಸ್ಥಳ | ಕರ್ತವ್ಯಕ್ಕೆ ಹಾಜರಾಗಬೇಕಾದ ಕಛೇರಿ: ಸ್ಥಳ |
|---|---|---|---|---|
| 1 | 2 | 3 | 4 | 5 |
| 1 | ಸಚಿನ ಮಿರಜಕರ್ ಬಿನ್ ಸುರೇಶ, ಬನಶಂಕರಿ ದೇವಸ್ಥಾನದ ಹತ್ತಿರ, ಕೆರೂರು ಅಂಚೆ, ಬಾಗಲಕೋಟೆ ತಾಲ್ಲೂಕು ಮತ್ತು ಜಿಲ್ಲೆ. | ಸಾಮಾನ್ಯ | ಗ್ರಾಮಲೆಕ್ಕಿಗರು, ಅರಕಲವಾಡಿ ವೃತ್ತ, ಹರದನಹಳ್ಳಿ ಹೋಬಳಿ, ಚಾಮರಾಜನಗರ ತಾಲ್ಲೂಕು. | ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು. |

| 1 | 2 | 3 | 4 | 5 |
|---|---|---|---|---|
| 2 | ಸಂತೋಷ ಕುಮಾರ್ ಎನ್. ಬಿನ್ ನಾರಾಯಣಸ್ವಾಮಿ, # 3106/5, 10ನೇ ಕ್ರಾಸ್, 1 ಮೈನ್, ಗಾಯತ್ರಿನಗರ, ಬೆಂಗಳೂರು | ಸಾಮಾನ್ಯ ಕ.ಮಾಧ್ಯಮ | ಗ್ರಾಮಲೆಕ್ಕಿಗರು, ನಂಜೇದೇವನಪುರ ವೃತ್ತ, ಹರವೆ ಹೋಬಳಿ, ಚಾಮರಾಜನಗರ ತಾಲ್ಲೂಕು. | ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು. |
| 3 | ದಿಲೀಪ್‌ಕುಮಾರ್.ಜಿ.ಎಲ್, ಬಿನ್ ಲಕ್ಕಣ್ಣ, # 35, ಗಂಗಪ್ಪನಹಳ್ಳಿ, ತಿಪ್ಪಗೊಂಡನಹಳ್ಳಿ ಅಂಚೆ, ತಾವರೆಕೆರೆ ಹೋಬಳಿ, ಬೆಂಗಳೂರು ದಕ್ಷಿಣ, ಬೆಂಗಳೂರು ನಗರ ಜಿಲ್ಲೆ. | ಸಾಮಾನ್ಯ ಗ್ರಾಮೀಣ | ಗ್ರಾಮಲೆಕ್ಕಿಗರು, ಹೆಗ್ಗವಾಡಿಪುರ ವೃತ್ತ, ಸಂತೇಮರಹಳ್ಳಿ ಹೋಬಳಿ, ಚಾಮರಾಜನಗರ ತಾಲ್ಲೂಕು. | ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು. |
| 4 | ಮಂಜುನಾಥಗೌಡ ಬಿ ದೊಡ್ಡಮನಿ ಬಿನ್ ಬಸನಗೌಡ, ಜಲ್ಲಪುರ ಗ್ರಾಮ ಮತ್ತು ಅಂಚೆ, ಸವಣೂರು ತಾಲ್ಲೂಕು, ಹಾವೇರಿ ಜಿಲ್ಲೆ. | ಸಾಮಾನ್ಯ | ಗ್ರಾಮಲೆಕ್ಕಿಗರು, ಬಾಗಳಿ ವೃತ್ತ, ಸಂತೇಮರಹಳ್ಳಿ ಹೋಬಳಿ, ಚಾಮರಾಜನಗರ ತಾಲ್ಲೂಕು. | ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು. |
| 5 | ಮಧುಶ್ರೀ ಎಸ್. ಬಿನ್ ಸಿದ್ದಪ್ಪಸ್ವಾಮಿ, #1870, ಮಠದ ಬೀದಿ, ಕೊಂಗರಹಳ್ಳಿ, ಕಾಮಗೆರೆ ಅಂಚೆ, ಕೊಳ್ಳೇಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ. | ಸಾಮಾನ್ಯ ಮಹಿಳೆ | ಗ್ರಾಮಲೆಕ್ಕಿಗರು, ಹಸಗೂಲಿ ವೃತ್ತ, ಬೇಗೂರು ಹೋಬಳಿ, ಗುಂಡ್ಲುಪೇಟೆ ತಾಲ್ಲೂಕು. | ತಾಲ್ಲೂಕು ಕಛೇರಿ, ಗುಂಡ್ಲುಪೇಟೆ ತಾಲ್ಲೂಕು. |
| 6 | ಸರಸ್ವತಿ ಗೊಂಡಕರ್ ಬಿನ್ ವಿಠ್ಠಪ್ಪ ಗೊಂಡಕರ್, ಶಿಗ್ಲಿ ಗ್ರಾಮ & ಅಂಚೆ, ಶಿರಹಟ್ಟಿ ತಾಲ್ಲೂಕು, ಗದಗ ಜಿಲ್ಲೆ. | ಸಾಮಾನ್ಯ ಮಹಿಳೆ | ಗ್ರಾಮಲೆಕ್ಕಿಗರು, ಬೆಂಡರವಾಡಿ ವೃತ್ತ, ಕಸಬಾ ಹೋಬಳಿ, ಚಾಮರಾಜನಗರ ತಾಲ್ಲೂಕು. | ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು. |
| 7 | ಶೃತಿ ಹೋಳಿ ಬಿನ್ ಜಯವಂತ, ವಾಟರ್ ಟ್ಯಾಂಕ್ ಹತ್ತಿರ, ಬನಹಟ್ಟಿ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. | ಸಾಮಾನ್ಯ ಮಹಿಳೆ | ಗ್ರಾಮಲೆಕ್ಕಿಗರು, ಹಂಡ್ರಕಳ್ಳಿ ವೃತ್ತ, ಕಸಬಾ ಹೋಬಳಿ, ಚಾಮರಾಜನಗರ ತಾಲ್ಲೂಕು. | ತಾಲ್ಲೂಕು ಕಛೇರಿ, ಚಾಮರಾಜನಗರ ತಾಲ್ಲೂಕು. |
| 8 | ಸಂತೋಷ್ ಬಡಿಗೇರ್ ಬಿನ್ ಅಡಿವೆಪ್ಪ, ಅಡವಿ ಸಂಗನಪುರ ಗ್ರಾಮ ಮತ್ತು ಅಂಚೆ, ವಿಜಯಪುರ ತಾಲ್ಲೂಕು ಮತ್ತು ಜಿಲ್ಲೆ. | 2ಎ ಸಾಮಾನ್ಯ | ಗ್ರಾಮಲೆಕ್ಕಿಗರು, ಶಿಂಡನಪುರ ವೃತ್ತ, ಕಸಬಾ ಹೋಬಳಿ, ಗುಂಡ್ಲುಪೇಟೆ ತಾಲ್ಲೂಕು. | ತಾಲ್ಲೂಕು ಕಛೇರಿ, ಗುಂಡ್ಲುಪೇಟೆ ತಾಲ್ಲೂಕು. |
| 9 | ಸದ್ದಾಂ ಹುಸೇನ್ ಇಂಗಳೇಶ್ವರ ಬಿನ್ ಹಸನ್‌ಸಾಬ್, ಚಾಂದಕವಡೆ ಗ್ರಾಮ ಮತ್ತು ಅಂಚೆ, ಸಿಂದಗಿ ತಾಲ್ಲೂಕು, ವಿಜಯಪುರ ಜಿಲ್ಲೆ. | 2ಬಿ ಗ್ರಾಮೀಣ | ಗ್ರಾಮಲೆಕ್ಕಿಗರು, ಹುಂಡೀಪುರ ವೃತ್ತ, ಹಂಗಳ ಹೋಬಳಿ, ಗುಂಡ್ಲುಪೇಟೆ ತಾಲ್ಲೂಕು. | ತಾಲ್ಲೂಕು ಕಛೇರಿ, ಗುಂಡ್ಲುಪೇಟೆ ತಾಲ್ಲೂಕು. |
| 10 | ಅಶೋಕ್ ವಾಲ್ಮೀಕಿ ಬಿನ್ ಮಹಲಿಂಗಪ್ಪ, ಕಲ್ಲಹಳ್ಳಿ ಗ್ರಾಮ, ಹೂವಿನಹಡಗಲಿ ತಾಲ್ಲೂಕು, ಬಳ್ಳಾರಿ ಜಿಲ್ಲೆ, | ಎಸ್.ಟಿ ಗ್ರಾಮೀಣ | ಗ್ರಾಮಲೆಕ್ಕಿಗರು, ಅಗತಗೌಡನಹಳ್ಳಿ ವೃತ್ತ, ಬೇಗೂರು ಹೋಬಳಿ, ಗುಂಡ್ಲುಪೇಟೆ ತಾಲ್ಲೂಕು. | ತಾಲ್ಲೂಕು ಕಛೇರಿ, ಗುಂಡ್ಲುಪೇಟೆ ತಾಲ್ಲೂಕು. |
| 11 | ದೇವೇಂದ್ರ ನಾಯ್ಕ ಬಿನ್ ಸೋಮಲನಾಯ್ಕ, ದೋಪದಹಳ್ಳಿ ತಾಂಡ ಗ್ರಾಮ ಮತ್ತು ಅಂಚೆ, ಕೂಡ್ಲಿಗಿ ತಾಲ್ಲೂಕು, ಬಳ್ಳಾರಿ ಜಿಲ್ಲೆ. | ಎಸ್.ಸಿ ಗ್ರಾಮೀಣ | ಗ್ರಾಮಲೆಕ್ಕಿಗರು, ಹೊನ್ನೂರು ವೃತ್ತ, ಕಸಬಾ ಹೋಬಳಿ, ಯಳಂದೂರು ತಾಲ್ಲೂಕು. | ತಾಲ್ಲೂಕು ಕಛೇರಿ, ಯಳಂದೂರು ತಾಲ್ಲೂಕು. |

| 1 | 2 | 3 | 4 | 5 |
|---|---|---|---|---|
| 12 | ಸುಧೀರ್ ಕೆ.ಜಿ. ಬಿನ್ ಗೋಪಾಲೇಗೌಡ<br>ಕೆ.ಎನ್. ಕಟ್ಟಾಯ ಗ್ರಾಮ ಮತ್ತು ಅಂಚೆ,<br>ಹಾಸನ ತಾಲ್ಲೂಕು ಮತ್ತು ಜಿಲ್ಲೆ. | ಸಾಮಾನ್ಯ<br>ಪಿ.ಡಿ.ಪಿ | ಗ್ರಾಮಲೆಕ್ಕಿಗರು,<br>ಕಾಗಲವಾಡಿ ವೃತ್ತ,<br>ಚಂದಕವಾಡಿ ಹೋಬಳಿ,<br>ಚಾಮರಾಜನಗರ ತಾಲ್ಲೂಕು. | ತಾಲ್ಲೂಕು ಕಛೇರಿ,<br>ಚಾಮರಾಜನಗರ ತಾಲ್ಲೂಕು. |

**ಷರತ್ತುಗಳು:**

1. ಕರ್ನಾಟಕ ನಾಗರಿಕ ಸೇವಾ ನಿಯಮಾವಳಿ ಖಾಯಂ ಪೂರ್ವ ಸೇವಾ ನಿಯಮಗಳು 1977ರ ಮೇರೆ ಕೆಲಸಕ್ಕೆ ಸೇರಿದ ದಿನಾಂಕದಿಂದ ಎರಡು ವರ್ಷದವರೆಗೆ ಪರಿವೀಕ್ಷಣಾ (ಆನ್ ಪ್ರೊಬೆಷನರಿ) ಅವಧಿ ಎಂದು ಪರಿಗಣಿಸಲಾಗುವುದು. ಸದರಿ ಅವಧಿಯಲ್ಲಿ ಸೇವೆಗೆ ಅನರ್ಹರೆಂದು ಕಂಡು ಬಂದಲ್ಲಿ ಸೇವೆಯಿಂದ ಬಿಡುಗಡೆ ಮಾಡಲಾಗುವುದು.
2. ಅಭ್ಯರ್ಥಿಯು ಈ ನೇಮಕಾತಿ ಆದೇಶ ಪಡೆದ ದಿನದಿಂದ 15 ದಿನಗಳೊಳಗೆ ಮೂಲ ದಾಖಲಾತಿಗಳೊಂದಿಗೆ ಸಂಬಂಧಪಟ್ಟ ತಹಶೀಲ್ದಾರರ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗುವುದು, ತಪ್ಪಿದಲ್ಲಿ ಕರ್ನಾಟಕ ನಾಗರಿಕ ಸೇವಾ (ಸಾಮಾನ್ಯ ನೇಮಕಾತಿ), 1977ರ ನಿಯಮ 17 ರನ್ವಯ ಈ ನೇಮಕಾತಿಯು ತಂತಾನೆ ರದ್ದಾಗುತ್ತದೆ.
3. ಅಭ್ಯರ್ಥಿಯು 2 ವರ್ಷಗಳ ಪರಿವೀಕ್ಷಣೆ ಅವಧಿಯಲ್ಲಿ (Probation period) (1) ಅಕೌಂಟ್ಸ್ ಲೋಯರ್ (2) ರೆವಿನ್ಯೂ ಲೋಯರ್ (3) ಕನ್ನಡ ಭಾಷಾ ಪರೀಕ್ಷೆ (ಎಸ್.ಎಸ್.ಎಲ್.ಸಿ. ಯಲ್ಲಿ ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ) ಮತ್ತು (4) ಕಂಪ್ಯೂಟರ್ ಲಿಟ್ರಸಿ ಟೆಸ್ಟ್‌ಗಳಲ್ಲಿ ಉತ್ತೀರ್ಣರಾಗುವುದು ಕಡ್ಡಾಯವಾಗಿರುತ್ತದೆ, ತಪ್ಪಿದಲ್ಲಿ ಹಾಗೂ ಕೆಲಸ ಕಾರ್ಯಗಳು ತೃಪ್ತಿಕರವಾಗಿರದಿದ್ದಲ್ಲಿ ಸೇವೆಯಿಂದ ತೆಗೆದು ಹಾಕಲಾಗುವುದು.
4. ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್:17:ಎಸ್‌ಆರ್‌ಆರ್:80 ದಿನಾಂಕ:09–10–1980 ರ ಮೇರೆ ಅವರ ಸೇವೆಯನ್ನು ನೇರ ನೇಮಕಾತಿಯ ಅಭ್ಯರ್ಥಿಯೆಂದು ಪರಿಗಣಿಸಲಾಗಿದೆ.
5. ಅಭ್ಯರ್ಥಿಗಳ ಜ್ಯೇಷ್ಠತೆಯು ಅಂತಿಮ ಆಯ್ಕೆ ಪಟ್ಟಿಯಲ್ಲಿರುವ ಕ್ರಮಾನುಸಾರವಾಗಿಯೇ ಇರತಕ್ಕದ್ದು ಹಾಗೂ ಇವರ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ಸರ್ಕಾರದ ನಿಯಮ/ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.
6. ಈ ನೇಮಕಾತಿ ಆದೇಶವು ಘನ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾಖಲಾಗಿರುವ ಅರ್ಜಿ ಸಂಖ್ಯೆ:7381/2015 ರ ಪ್ರಕರಣದ ಅಂತಿಮ ತೀರ್ಪಿನನ್ವಯ ಮಾರ್ಪಡಿಸುವ ಷರತ್ತಿಗೆ ಒಳಪಟ್ಟಿರುತ್ತದೆ.
7. ಅಭ್ಯರ್ಥಿಯು ನೇರ ನೇಮಕಾತಿ ಮೇಲೆ ನೇಮಕಾತಿಗಾಗಿ ಯಾವುದೇ ತಪ್ಪು ಮಾಹಿತಿ ನೀಡಿ ನೇಮಕಾತಿ ಹೊಂದಿರುವುದು, ಮುಂದೆ ಸಾಬೀತಾದಲ್ಲಿ ನೇಮಕಾತಿಯನ್ನು ಯಾವುದೇ ಷರತ್ತಿಲ್ಲದೆ ರದ್ದುಪಡಿಸಲಾಗುವುದು.
8. ಅಭ್ಯರ್ಥಿಯು ಹುಟ್ಟಿದ ದಿನಾಂಕ, ಶೈಕ್ಷಣಿಕ ಅರ್ಹತೆಗಳ ಪ್ರಮಾಣ ಪತ್ರ ಹಾಗೂ ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮೀಸಲಾತಿ ಪ್ರಮಾಣ ಪತ್ರ ಮೂಲ ದಾಖಲೆಗಳನ್ನು ಕರ್ತವ್ಯಕ್ಕೆ ಹಾಜರಾಗುವ ವೇಳೆಯಲ್ಲಿ ಹಾಜರುಪಡಿಸುವುದು.
9. ಅಭ್ಯರ್ಥಿಯು ವಾಸಿಸುತ್ತಿರುವ ಕ್ಷೇತ್ರಕ್ಕೆ ಸಂಬಂಧಿಸಿದ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ ನಡತೆ ಪ್ರಮಾಣ ಪತ್ರಗಳನ್ನು ಹಾಜರುಪಡಿಸುವುದು.
10. ಅಭ್ಯರ್ಥಿಯು ಕರ್ತವ್ಯಕ್ಕೆ ಸರ್ಕಾರಿ ಸೇವೆಗೆ ಸೇರಲು ಅರ್ಹರಾಗಿರುವ ಬಗ್ಗೆ ಜಿಲ್ಲಾ ಸರ್ಜನ್ ದರ್ಜೆಗೆ ಕಡಿಮೆಯಿಲ್ಲದ ವೈದ್ಯಾಧಿಕಾರಿಗಳಿಂದ ದೈಹಿಕ ಸಾಮರ್ಥ್ಯದ ಪ್ರಮಾಣ ಪತ್ರವನ್ನು ಪಡೆದು ಹಾಜರುಪಡಿಸುವುದು.
11. ಅಭ್ಯರ್ಥಿಯು ಸೇವೆಗೆ ಹಾಜರಾಗಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ ಸ್ವೀಕರಿಸುವುದು" ಸರ್ಕಾರದ ಸುತ್ತೋಲೆ ಸಂ. ಕಂ.ಇ/54/ಬಿಎಸ್‌ಸಿ/2007, ದಿನಾಂಕ: 27–02–2007 ರನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ಕನಿಷ್ಠ 5 ವರ್ಷಗಳ ಸೇವೆಯನ್ನು ಚಾಮರಾಜನಗರ ಜಿಲ್ಲೆಯಲ್ಲಿ ಕಡ್ಡಾಯವಾಗಿ ಪೂರೈಸತಕ್ಕದ್ದು.
12. ಅಭ್ಯರ್ಥಿಗಳು ತಾಲ್ಲೂಕು ಕಛೇರಿಗೆ ನೇಮಕಾತಿ ಹೊಂದಿರುವುದರಿಂದ ಗ್ರಾಮಲೆಕ್ಕಿಗರ ಹುದ್ದೆಯಿಂದ ಪದೋನ್ನತಿ ಹೊಂದುವವರೆಗೂ ಗ್ರಾಮಲೆಕ್ಕಿಗರಾಗಿ ಕಾರ್ಯ ನಿರ್ವಹಿಸುವುದು, ಯಾವುದೇ ಕಾರಣಕ್ಕೂ ವೃಂದ ಬದಲಾವಣೆಗೆ ಅವಕಾಶವಿರುವುದಿಲ್ಲ.
13. ಅಭ್ಯರ್ಥಿಯು ಕರ್ತವ್ಯದ ಮೇಲೆ ಹಾಜರಾದ ನಂತರ ಪ್ರಥಮ ವೇತನ ಪಡೆಯಲು ಸರ್ಕಾರಿ ಆದೇಶ ಸಂಖ್ಯೆ:ಜಿಎಡಿ(3)ಎಸ್‌ಆರ್‌ಎಸ್:74, ದಿನಾಂಕ: 02–08–1974 ರ ಅನ್ವಯ ಪ್ರಮಾಣ ಪತ್ರ ಪಡೆದು ಸಲ್ಲಿಸುವುದು.
14. ಗ್ರಾಮಲೆಕ್ಕಿಗರನ್ನು ಕರ್ತವ್ಯಕ್ಕೆ ತೆಗೆದುಕೊಳ್ಳುವ ಸಂದರ್ಭದಲ್ಲಿ ನಿಗಧಿಪಡಿಸಿದ ಮೊಬಲಗಿನ ಕೆಜಿಐಡಿ ಮೊತ್ತವನ್ನು ಬ್ಯಾಂಕಿನಲ್ಲಿ ಅಭ್ಯರ್ಥಿಗಳು ಪಾವತಿಸಿದ ಚಲನ್‌ನ್ನು ತಹಸೀಲ್ದಾರ್‌ರವರಲ್ಲಿ ಹಾಜರುಪಡಿಸುವುದು, ಸಂಬಂಧಪಟ್ಟ ತಹಸೀಲ್ದಾರ್‌ರವರು ತಕ್ಷಣ ಪ್ರಸ್ತಾವನೆಯನ್ನು ವಿಮಾಧಿಕಾರಿಗಳಿಗೆ ಕಳುಹಿಸುವುದು.
15. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿರುವ ಬಗ್ಗೆ, ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರುಗಳು ನೀಡಿರುವ ನಿರಾಕ್ಷೇಪಣಾ ಪತ್ರವನ್ನು ಸಲ್ಲಿಸುವುದು. ಅಂತಹ ಅಭ್ಯರ್ಥಿಗಳು ಇಲಾಖೆಯಿಂದ ಬಿಡುಗಡೆಯಾಗಿರುವ ಬಗ್ಗೆ ದೃಢೀಕರಣ ಪತ್ರವನ್ನು ಹಾಜರುಪಡಿಸತಕ್ಕದ್ದು.
16. ನೇಮಕಾತಿಗೊಳಿಸಲಾದ ಸ್ಥಳ/ಕಛೇರಿಯನ್ನು ಯಾವುದೇ ಕಾರಣಕ್ಕೂ ಬದಲಾವಣೆ ಮಾಡಲಾಗುವುದಿಲ್ಲ, ಸ್ಥಳ ಬದಲಾವಣೆ ಮಾಡುವಂತೆ ಒತ್ತಡ ತಂದಲ್ಲಿ ಅಂತಹ ಅಭ್ಯರ್ಥಿಗಳ ನೇಮಕಾತಿ ಆದೇಶವನ್ನು ರದ್ದುಗೊಳಿಸಲಾಗುತ್ತದೆ.

